

# ಕರ್ನಾಟಕ ವಿಧಾನ ಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

## **ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 25-03-2021 ಪ್ರಶ್ನೆ ಸಂಖ್ಯೆ : 1805 (2142)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀಮತಿ ಭಾರತಿ ಶೆಟ್ಟಿ (ನಾಮನಿರ್ದೇಶನ ಹೊಂದಿದವರು)

ಉತ್ತರ ನೀಡಬೇಕಾದ ದಿನಾಂಕ : 25-03-2021

ಉತ್ತರಿಸುವ ಸಚಿವರು: ಗೃಹ ಮತ್ತು ಕಾನೂನು, ಸಂಸದೀಯ ವ್ಯವಹಾರಗಳು ಹಾಗೂ ಶಾಸನ ರಚನೆ ಸಚಿವರು

ವಿಷಯ : ಸರ್ಕಾರ ಹಾಗೂ ಸರ್ಕಾರದ ವಿರುದ್ಧವಿರುವ ಪ್ರಕರಣಗಳ ಕುರಿತು

(ಅ) ಸರ್ಕಾರ ಹಾಗೂ ಸರ್ಕಾರದ ವಿರುದ್ಧವಿರುವ ಪ್ರಕರಣಗಳು ಹೈಕೋರ್ಟ್‌ನಲ್ಲಿ ಎಷ್ಟಿವೆ ;

(ಆ) ಸದರಿ ಪ್ರಕರಣದಲ್ಲಿ ಯಥಾಸ್ಥಿತಿ ಕಾಪಾಡುವ ಎಷ್ಟು ಪ್ರಕರಣಗಳಿವೆ;

(ಇ) ವಿವಿಧ ಕಾರಣಗಳಿಂದ ಸರ್ಕಾರಕ್ಕೆ ಸಂಬಂಧಿತ ವ್ಯಾಜ್ಯಗಳ ವಿಲೇವಾರಿ ವಿಳಂಬದಿಂದ ಸರ್ಕಾರದ ಆಸ್ತಿ ಸದ್ಬಳಕೆಗೆ ಸಮಸ್ಯೆ ಆಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; ಹಾಗಿದ್ದಲ್ಲಿ, ಪ್ರಕರಣಗಳ ಶೀಘ್ರ ವಿಲೇವಾರಿಗೆ ಸರ್ಕಾರ ಉಚ್ಚ ನ್ಯಾಯಾಲಯದ ನ್ಯಾಯಮೂರ್ತಿಗಳ ಜೊತೆ ಚರ್ಚಿಸುವುದೇ ;

(ಈ) ಸರ್ಕಾರಕ್ಕೆ ಸಂಬಂಧಿಸಿದ ಪ್ರಕರಣಗಳ ಕುರಿತಂತೆ ಕಾಲಮಿತಿಯಲ್ಲಿ ನ್ಯಾಯ ಸಿಗುವಂತೆ ಮಾಡಲು ಬಾಕಿ ಇರುವ ಪ್ರಕರಣಗಳ ಸಂಖ್ಯೆಗೆ ಅನುಗುಣವಾಗಿ ನ್ಯಾಯಾಧೀಶರ ಸಂಖ್ಯೆ ಹೆಚ್ಚಿಸಲು ಸರ್ಕಾರದ ಕ್ರಮಗಳೇನು ; ಕಾಲಮಿತಿಯ ನಿಯಮ ಕಡ್ಡಾಯವಾಗಿ ಪಾಲನೆಯಾಗುವಂತೆ ಸರ್ಕಾರ ಎಚ್ಚರಿಕೆ ವಹಿಸುವುದೇ ?